


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 927 (1145)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ರಸ್ತೆ, ಸೇತುವೆ ಮತ್ತು ತಡೆಗೋಡೆಗಳ ದುರಸ್ಥಿ ಹಾಗೂ ನಿರ್ಮಾಣ ಕುರಿತು

(ಅ) ಕೊಡಗು ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ಸುರಿದ ಧಾರಾಕಾರ ಮಳೆ ಹಾಗೂ ಭೂಕುಸಿತದಿಂದಾಗಿ, ಗ್ರಾಮೀಣ ಭಾಗದ ಹಲವಾರು ರಸ್ತೆ, ಸೇತುವೆ ಮತ್ತು ತಡೆಗೋಡೆಗಳು ಹಾನಿಗೀಡಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ಕಳೆದ 3 ವರ್ಷಗಳಲ್ಲಿ ಹಾನಿಗೀಡಾದ ರಸ್ತೆ, ಸೇತುವೆ ಹಾಗೂ ತಡೆಗೋಡೆಗಳು ಯಾವುವು ಮತ್ತು ಅವುಗಳ ದುರಸ್ಥಿ ಅಥವಾ ಮರು ನಿರ್ಮಾಣ ಮಾಡಲಾಗಿದೆಯೇ ; (ವರ್ಷವಾರು ಹಾಗೂ ಕಾಮಗಾರಿವಾರು ಮಾಹಿತಿ ನೀಡುವುದು)

(ಇ) ಪ್ರಸ್ತುತ ಆರ್ಥಿಕ ವರ್ಷದಲ್ಲಿ ಈ ರೀತಿ ಹಾನಿಗೀಡಾದ ರಸ್ತೆ, ಸೇತುವೆ ಮತ್ತು ತಡೆಗೋಡೆಗಳ ದುರಸ್ಥಿ ಅಥವಾ ಮರು ನಿರ್ಮಾಣಕ್ಕೆ ವಿನಿಯೋಗಿಸಿರುವ ಅನುದಾನದ ವಿವರಗಳನ್ನು ಕಾಮಗಾರಿವಾರು ನೀಡುವುದು ;

(ಈ) ಇದುವರೆಗೂ ದುರಸ್ಥಿ ಅಥವಾ ಮರು ನಿರ್ಮಾಣವಾಗದೆ ಇರುವ ರಸ್ತೆ, ಸೇತುವೆ ಹಾಗೂ ತಡೆಗೋಡೆಗಳು ಯಾವುವು ; ಮತ್ತು ಅವುಗಳನ್ನು ಯಾವ ಕಾಲಮಿತಿಯೊಳಗೆ ದುರಸ್ಥಿ ಅಥವಾ ಮರು ನಿರ್ಮಾಣ ಮಾಡಲಾಗುವುದು ?